ಒಂದಾಣೆ ಮಾಲೆ 195

# ಮಹಾಪುರುಷರ ಬಾಲ್ಯಸ್ಮೃತಿಗಳು

(೧)



ಲೇಖಕರು:
ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್,
ಮಂಗಳೂರು.

1958

ಬೆಲೆ: ಒಂದಾಣೆ.

ಒಂದಾಣೆ ಮಾಲೆ, ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ಜುಲಾಯಿ ತಿಂಗಳ ಎರಡನೆಯ ವಾರದ ವರೆಗೆ 195 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

195 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 3972 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಮಹಾಪುರುಷರ ಬಾಲ್ಯಸ್ಮೃತಿಗಳು

## ೧. ಬಾಲಕ ಈಶ್ವರಚಂದ್ರ

ಈಶ್ವರಚಂದ್ರನು ಬಹು ವಿನಯಶಾಲಿಯಾದ ಹುಡುಗ. ಅವನು ಹುಟ್ಟಿದ್ದು (ತಾ. ೨೯-೯-೧೮೨೦) ಕಲ್ಕತ್ತೆಯಿಂದ ಐವತ್ತೆರಡು ಮೈಲು ದೂರದ ಒಂದು ಹಳ್ಳಿಯಲ್ಲಿ. ಅವನ ತಂದೆ ಒಬ್ಬ ಬಡ ಬ್ರಾಹ್ಮಣನು. ಹತ್ತು ರೂಪ್ಯಾ ಸಂಬಳದ ಒಬ್ಬ ಗುಮಾಸ್ತನು. ಈ ಕಾರಣದಿಂದಾಗಿ ಈಶ್ವರನಿಗೆ ಚಿಕ್ಕಂದಿನಿಂದಲೇ ಬಡತನದ ಕಷ್ಟಗಳ ಪರಿಚಯವಿದ್ದಿತು.

ಈಶ್ವರನು ಮೊದಲು ಒಂದು ಚಿಕ್ಕ ಹಳ್ಳಿ ಶಾಲೆಗೆ ಹೋಗುತ್ತಿದ್ದನು. ಅವನಿಗೆ ಎಂಟು ವರ್ಷ ವಯಸ್ಸಾದಾಗ ಅವನ ತಂದೆಯು ಅವನನ್ನು ಕಲ್ಕತ್ತೆಯ ಸಂಸ್ಕೃತ ಕಾಲೇಜಿಗೆ ಕಳುಹಿಸಿದನು. ಸಂಸ್ಕೃತ ಕಲಿಯುವುದೆಂದರೆ ಬಹು ಕಷ್ಟ. ಇಂದು ಕೊಟ್ಟ ಪಾಠಗಳೆಲ್ಲವೂ ನಾಳೆಗೆ ಬಾಯಿಪಾಠವಾಗಲೆ ಬೇಕು. ಅದಲ್ಲದೆ ತಂದೆಗೆ ಮಗನು ಎಷ್ಟು ಓದಿದರೂ ತೃಪ್ತಿಯಾಗುತ್ತಿರಲಿಲ್ಲ. ಅಂದು ಹೇಳಿಕೊಟ್ಟ ಪಾಠವು ಅಂದು ರಾತ್ರೆ. ಬಾಯಿಪಾಠ ಬರಬೇಕು. ತಂದೆಯು ಪ್ರತಿ ದಿವಸವೂ ರಾತ್ರೆ ಹೊತ್ತಿನಲ್ಲಿ ಮಗನೊಡನೆ ಪಾಠಗಳನ್ನು ಒಪ್ಪಿಸೆಂದು ಹೇಳುತ್ತಿದ್ದನು. ಎಲ್ಲಿಯಾದರೂ ಸ್ವಲ್ಪ ತಪ್ಪಿದರೆ ಅವನನ್ನು ಸರಿಯಾಗಿ ಶಿಕ್ಷಿಸುತ್ತಿದ್ದನು. ತಂದೆಯು ಹೀಗೆ ಮಗನಿಗೆ ಹೊಡೆಯುವಾಗ ಅನೇಕ ಸಾರಿ ನೆರೆಹೊರೆಯವರು ಓಡಿ ಬಂದು ತಡೆಯುತ್ತಿದ್ದರು. ಒಂದು ಸಾರಿ ತಂದೆಯು ಜೋರಾಗಿ ಹೊಡೆದ ಕಾರಣದಿಂದ ಈಶ್ವರನು ಮನೆಯಿಂದ ಓಡಿಹೋಗಿ ಕಾಲೇಜಿನ ಗುಮಾಸ್ತನ ಮನೆಯಲ್ಲಿ ಅಡಗಿದ್ದನು. ಕೆಲವು ದಿವಸಗಳ ವರೆಗೆ ಅಲ್ಲಿಯೇ ಇದ್ದನಂತೆ.

ಹೀಗೆ ಈಶ್ವರನು ಶಾಲೆಯ ಕೆಲಸಗಳನ್ನಲ್ಲದೆ ಮನೆಯ ಕೆಲಸವನ್ನೂ ಮಾಡಬೇಕಿತ್ತು. ಸಂತೆಗೆ ಹೋಗಿ ಸಾಮಾನು ತರುವುದು, ಮನೆಯನ್ನು ಚೊಕ್ಕಟವಾಗಿಡುವುದು, ಇವೆಲ್ಲವೂ ಅವನ ಕೆಲಸವಾಗಿತ್ತು. ಒಮ್ಮೊಮ್ಮೆ

ಅಡಿಗೆಯನ್ನೂ ಮಾಡುತ್ತಿದ್ದನು. ದಿನವಿಡೀ ಈ ರೀತಿ ಕೆಲಸವಿದ್ದೂ ರಾತ್ರೆ ವಿಶ್ರಾಂತಿಯಿದೆಯೇ? ಅದೂ ಇಲ್ಲ. ಅವನ ತಂದೆ ಮಲಗುವುದು ಹನ್ನೆರಡು ಗಂಟೆಗೆ. ತಾನು ಮಲಗಲಿಕ್ಕೆ ಹೋಗುವಾಗ ಅವನು ಮಗನನ್ನು ಎಬ್ಬಿಸಿ ಓದಲಿಕ್ಕೆ ಕುಳ್ಳಿರಿಸುತ್ತಿದ್ದನು. ಈಶ್ವರನು ಮಲಗುವುದು ಹತ್ತರ ವರೆ ಗಂಟೆಗೆ. ಹನ್ನೆರಡು ಗಂಟೆಗೆ ಏಳಲೇಬೇಕು. ಆ ಮೇಲೆ ಬೆಳಗಿನ ವರೆಗೆ ಅವನು ಶಾಲೆಯ ಕೆಲಸ ಮಾಡಬೇಕು. ಬೆಳಗಾದ ಮೇಲೆ ಮನೆಯ ಕೆಲಸ ಹೇಗೂ ಇದೆಯಷ್ಟೇ! ಹೀಗೆ ಈಶ್ವರನ ಬಾಲ್ಯವು ಬಹಳ ಕಷ್ಟತರವಾಗಿದ್ದಿತು. ಈ ಕಾರಣದಿಂದಲೇ ಅವನು ಸಾಧು ಸ್ವಭಾವದವನಾದನು. ಇಪ್ಪತ್ತು ವರ್ಷಗಳ ವರೆಗೆ ಕಷ್ಟಪಟ್ಟು ವಿದ್ಯೆ ಕಲಿತು "ವಿದ್ಯಾಸಾಗರ" ಎಂಬ ಬಿರುದನ್ನು ಪಡೆದನು. ತಾನು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲನಾದನು.

.........

## ೨. ಬಾಲಕ ಗದಾಧರ

ಕಾಮಾರಪುಕುರದಲ್ಲಿ ಖುದಿರಾಮ-ಚಂದ್ರಾದೇವಿಯರೆಂಬ ಸಾಧು ದಂಪತಿಗಳಿದ್ದರು. ಅವರಿಗೆ ಬಹುಕಾಲ ಮಕ್ಕಳಾಗಲಿಲ್ಲ. ಕೊನೆಗೆ ಗಯಾ ಕ್ಷೇತ್ರದ ಗದಾಧರ ಸ್ವಾಮಿಯ ಅನುಗ್ರಹದಿಂದ ಅವರಿಗೆ ಒಂದು ಮಗುವು ಹುಟ್ಟಿತು (ತಾ. ೨೦-೨-೧೮೩೬). ಅದಕ್ಕೆ ಗದಾಧರನೆಂದೇ ಹೆಸರಿಟ್ಟರು.

ಚಿಕ್ಕಂದಿನಲ್ಲೇ ಗದಾಧರನಿಗೆ ಅಸಾಧಾರಣವಾದ ಬುದ್ಧಿಶಕ್ತಿಯಿತ್ತು; ಅದ್ಭುತವಾದ ಪ್ರತಿಭೆಯಿತ್ತು. ಖುದಿರಾಮನು ಮಹಾಭಾರತ ರಾಮಾಯಣ ಮೊದಲಾದ ಪುರಾಣಗಳ ಕಥೆಗಳನ್ನಾಗಲೀ ದೇವರ ಸ್ತೋತ್ರವನ್ನಾಗಲೀ ಒಮ್ಮೆ ಹೇಳಿದರೆ ಸಾಕು—ಕೂಡಲೇ ಆ ಚಿಕ್ಕ ಹುಡುಗನು ಅವುಗಳನ್ನೆಲ್ಲ ಬಾಯಿಪಾಠ ಹೇಳುತ್ತಿದ್ದನು. ತಂದೆತಾಯಿಗಳಿಗೆ ಅದನ್ನು ಕಂಡು ಬಹಳ ಸಂತೋಷವಾಗುತ್ತಿತ್ತು. ಐದು ವರ್ಷವಾಗಬೇಕಾದರೆ ಅವನನ್ನು ಪಾಠಶಾಲೆಗೆ ಕಳುಹಿಸಿದರು.

ಗೆಳೆಯರಿಗೆಲ್ಲ ಗದಾಧರನೇ ಮುಂದಾಳು. ಪಾಠದಲ್ಲಿ ಹೇಗೋ ಆಟದಲ್ಲೂ ಹಾಗೆಯೇ ಗಟ್ಟಿಗನಾಗಿದ್ದನು. ತಾನು ಎಷ್ಟೇ ತಂಟೆಗಳನ್ನು ಮಾಡಲಿ, ಅದರಿಂದ ಇತರರಿಗೆ ಎಳ್ಳಷ್ಟೂ ಕೇಡುಂಟಾಗದಂತೆ ಜಾಗ್ರತೆ

ತೆಗೆದುಕೊಳ್ಳುತ್ತಿದ್ದನು. ಅದಲ್ಲದೆ ಅವನು ಎಷ್ಟು ಸರಲಸ್ವಭಾವದವನಾಗಿದ್ದ ನೆಂದರೆ—ತನ್ನ ತಪ್ಪುಗಳನ್ನು ಕೂಡಲೇ ಒಪ್ಪಿಕೊಳ್ಳುತ್ತಿದ್ದನು!

ಗದಾಧರನಲ್ಲಿದ್ದ ವಿಶೇಷ ಗುಣವೆಂದರೆ—ಯಾವ ವಿಷಯವನ್ನೇ ಹೇಳಲಿ–"ಅದು ಏಕೆ? ಅದು ಹಾಗಾಗಲು ಕಾರಣವೇನು?" ಎಂಬ ಜಿಜ್ಞಾಸೆ! ಎಂದರೆ ಆ ವಿಷಯದ ಕೂಲಂಕಷ ವಿವರವನ್ನು ತಿಳಿದುಕೊಳ್ಳುವ ಹಂಬಲ ಅವನಲ್ಲಿ ಅತ್ಯಂತವಾಗಿ ಇತ್ತು.

ಶಿಲ್ಪಿ ಕೆಲಸಗಳನ್ನು—ಆ ಮೂರ್ತಿಗಳನ್ನು ನೋಡುತ್ತಾ ನೋಡುತ್ತಾ ಚಿತ್ರಕಲೆಯನ್ನೂ—ಅಭ್ಯಾಸ ಮಾಡಿದನು. ಊರಲ್ಲಿ ನಡೆಯುವ ಪುರಾಣ ವಾಚನಗಳಿಗೂ ಭಜನೆ–ಹರಿಕೀರ್ತನೆಗಳಿಗೂ ಬಿಡದೆ ಹೋಗುತ್ತಾ, ಗದಾಧರನು ಪುರಾಣಪುರುಷರ ಶಕ್ತಿಮಹಿಮೆಗಳ ಪರಿಚಯ ಮಾಡಿಕೊಂಡನು. ಅನುಕರಣಶಕ್ತಿಯು ಅವನಲ್ಲಿ ಅಧಿಕವಾಗಿತ್ತಾದ ಕಾರಣ, ಮಹಾತ್ಮರ ದಿವ್ಯಚರಿತ್ರೆಗಳನ್ನು ಹಾವಭಾವಗಳೊಡನೆ ಸಹಜವಾಗಿ ಅಭಿನಯಿಸುತ್ತಿದ್ದನು. ಅವರ ಗುಣನಡತೆಗಳನ್ನು ತಾನೂ ಕಲಿತುಕೊಂಡನು. ದೇವರ ಮೇಲೂ ಗುರುಹಿರಿಯರ ಮೇಲೂ ಯಾವ ರೀತಿಯ ಭಕ್ತಿಯನ್ನಿಡಬೇಕೆಂಬುದನ್ನು ಕಾರ್ಯರೂಪದಲ್ಲಿ ತೋರಿಸಿ, ಎಲ್ಲರ ಪ್ರೀತಿಗೆ ಪಾತ್ರನಾದನು.

ಗದಾಧರನು ಹತ್ತು ವರ್ಷ ಪ್ರಾಯದವನಾದಾಗ ಅವನ ತಂದೆಯು ಸ್ವರ್ಗಸ್ಥನಾದನು. ತಾಯಿಯಾದ ಚಂದ್ರಾದೇವಿಗೆ ಈಗೀಗ ಗಧಾದರನ ವಿಷಯದಲ್ಲಿ "ಎಲ್ಲಿ ಕೈತಪ್ಪಿ ಹೋಗುವನೋ" ಎಂಬ ಭಯವು ಉಂಟಾಯಿತು. ಏಕೆಂದರೆ ಆ ಊರಿನ "ಲಹಾರಿಬಾಬು"ಗಳೆಂಬ ಮಹಾತ್ಮರು ಕಟ್ಟಿಸಿದ ಧರ್ಮಶಾಲೆಯಲ್ಲಿ, ತೀರ್ಥಕ್ಷೇತ್ರಗಳಿಗೆ ಹೋಗತಕ್ಕ ಬೇರೆ ಊರಿನ ಸಾಧು ಬೈರಾಗಿಗಳು ಒಂದೆರಡು ದಿವಸಗಳ ತನಕ ಉಳಕೊಳ್ಳುತ್ತಿದ್ದರು. ತಂದೆಯ ಮರಣದಿಂದಾಗಿ ಒಂದು ತರದ ವೈರಾಗ್ಯಬುದ್ಧಿಯು ಗದಾಧರನ ಆ ಚಿಕ್ಕ ತಲೆಯಲ್ಲಿ ಉಂಟಾದುದರಿಂದ, ಅವನಿಗೆ ಆ ಸಾಧು–ಸತ್ಪುರುಷರ ಸಹವಾಸದಿಂದ ಸ್ವಲ್ಪ ಸುಖವೆನಿಸಿತು. ಅವರು ಈ ಹುಡುಗನ ಸಾಧು ಬುದ್ಧಿಯನ್ನು ಕಂಡು ಮೆಚ್ಚಿದರು. ಅವನಿಗೆ ಭಜನೆ–ಪ್ರಾರ್ಥನೆಗಳನ್ನು ಹೇಳಿಕೊಟ್ಟರು. ಹಗಲೂ ರಾತ್ರಿ ಅವರ ಸನ್ನಿಧಿಯಲ್ಲಿಯೇ ಅವನು ಕಾಲ ಕಳೆಯುತ್ತಿದ್ದನು. ಆ ಸಾಧುಗಳಂತೆಯೇ ವೇಷಭೂಷಣಗಳನ್ನು ಹಾಕಿಕೊಳ್ಳುತ್ತಿದ್ದನು. ಚಂದ್ರಾದೇವಿಯು ಈಗ ಹೆದರಿದಳು. ಆ ಸಾಧು–

ಬೈರಾಗಿಗಳು ಇವನನ್ನೂ ಕೂಡ ತಮ್ಮೊಡನೆ ಕರೆದುಕೊಂಡು ಹೋಗುವರೋ ಎಂಬ ಕಳವಳದಿಂದ ಅವಳು, ಕೂಡಲೇ ಅವರಿದ್ದಲ್ಲಿಗೆ ಬಂದು ಎಲ್ಲವನ್ನೂ ವಿಚಾರಿಸಿದಳು. ಅವರು ಆಗ—"ಅಮ್ಮಾ! ತಾಯಿ ತಂದೆಗಳ ಅನುಮತಿಯಿಲ್ಲದೆ ಈ ಚಿಕ್ಕ ಹುಡುಗನನ್ನು ನಾವೆಲ್ಲಿಗೂ ಕರೆದೊಯ್ಯುವುದಿಲ್ಲ!" ಎಂದು ಸಮಾಧಾನಪಡಿಸಿದರು.

ಒಂದು ದಿನ ಧರ್ಮಿಷ್ಠರಾದ ಲಹಾರಿಬಾಬುಗಳ ಮನೆಯಲ್ಲಿ ಪಂಡಿತರ ಸಭೆಯೊಂದು ಸೇರಿತ್ತು. ಪರಮಾತ್ಮಪರವಾದ ಕಠಿಣ ವಿಷಯವೊಂದರ ಚರ್ಚೆಯು ನಡೆಯುತಿತ್ತು. ಆದರೆ, ಸರಿಯಾದ ಸಿದ್ಧಾಂತವು ಏನೆಂದು ನಿಶ್ಚಯವಾಗಲಿಲ್ಲ. ಆದಿಯಿಂದ ಅಂತ್ಯದ ವರೆಗೆ ಆ ಪಂಡಿತರ ಮಾತುಗಳೆಲ್ಲವನ್ನೂ ಕೇಳುತ್ತ ಇದ್ದ ಗದಾಧರನು, "ಆ ವಿಷಯದ ಸರಿಯಾದ ಉತ್ತರವು ಹೀಗಲ್ಲವೇ?" ಎಂದು ಯಥಾರ್ಥ ವಿಷಯವನ್ನು ವಿಸ್ತರಿಸಿ ಹೇಳಿದನು. ಬಾಲಕನ ಅಸಾಧಾರಣಬುದ್ಧಿಶಕ್ತಿಯನ್ನು ಕಂಡು ವಿದ್ವಾಂಸರೆಲ್ಲರೂ ಬೆರಗಾದರು. ಆ ಮೇಲೆ—"ಇದೊಂದು ಇನ್ನು ಮುಂದೆ ಅತಿಶಯವಾಗಿ ಉರಿಯಲಿಕ್ಕಿದ್ದ ಬೆಂಕಿಯ ಸಣ್ಣ ಕೆಂಡ!" ಎಂದು ತಿಳಿದು "ಮಹಾತ್ಮನಾಗೆಂ"ದು ಆಶೀರ್ವದಿಸಿದರು.

ಬಾಲಕ ಗದಾಧರನ ದೈವಭಕ್ತಿಯು ಒಮ್ಮೆ ಈ ರೀತಿ ಪ್ರಕಟವಾಗಿತ್ತು. ಅಂದೊಮ್ಮೆ ಶಿವರಾತ್ರಿಯ ದಿನ "ಶಂಕರ ವಿಜಯ"ವೆಂಬ ನಾಟಕವನ್ನು ಆ ಊರಿನವರು ಆಡಬೇಕೆಂದು ನಿಶ್ಚಯಿಸಿದರು. ಅದರಲ್ಲಿ ಶಿವನ ಪಾತ್ರವನ್ನು ಗದಾಧರನು ವಹಿಸಿಕೊಂಡನು, ಶಂಕರನ ವೇಷಭೂಷಣಗಳನ್ನೆಲ್ಲ ಸರಿಯಾಗಿ ಧರಿಸಿದ ಗದಾಧರನು ಭಾವಾವೇಶಗೊಂಡವನಂತಾಗಿ ಎಚ್ಚರ ತಪ್ಪಿ ಬಿದ್ದನು. ಈ ಎಲ್ಲ ಕಾರಣಗಳಿಂದ ಆ ಹುಡುಗನನ್ನು ದೇವಾಂಶ ಸಂಭೂತನೆಂದು ಎಲ್ಲರೂ ತಿಳಿದುಕೊಳ್ಳಲಾರಂಭಿಸಿದರು.

ರಾಮಾಯಣ, ಮಹಾಭಾರತ ಮೊದಲಾದ ಪುರಾಣಗಳ ಕತೆಯನ್ನು ರಸಪೂರ್ಣವಾಗಿ ವಾಚನ ಮಾಡುವುದರಲ್ಲಿ ಬಾಲಕ ಗದಾಧರನು ಎತ್ತಿದ ಕೈಯಾಗಿದ್ದನು. ಆಗ ಯಾರೂ ಅವನ ವಯಸ್ಸಿನತ್ತ ಕಡೆ ಗಮನ ಕೊಡುತ್ತಿದ್ದಿಲ್ಲ. ಊರಿನ ಎಲ್ಲ ಸ್ತ್ರೀಪುರುಷರೂ ಅವನು ಹೇಳುವ ವಿಷಯಗಳನ್ನು ಪ್ರತ್ಯಕ್ಷ ನೋಡಿದವರಂತೆಯೇ ಅನುಭವ ಮಾಡಿಕೊಳ್ಳುತ್ತಿದ್ದರು.

ಹತ್ತು ಹದಿನಾಲ್ಕು ವರ್ಷದ ಗದಾಧರನು ಒಮ್ಮೊಮ್ಮೆ—"ಸಂಸಾರವನ್ನು ತ್ಯಾಗಮಾಡಿ ತಪಸ್ಸು ಮಾಡಲು ತೊಡಗಬೇಕು!" ಎಂದು ಆಲೋಚಿಸುತಿದ್ದನು. "ಆದರೆ, ಮುಪ್ಪಿನ ತಾಯಿಯನ್ನು ಒಬ್ಬಂಟಿಗಳನ್ನಾಗಿ ಬಿಟ್ಟು ಹೋಗುವುದು ಹೇಗೆ? ನಾನು ಒಂದು ವೇಳೆ ಬಿಟ್ಟು ಹೋದರೂ ತಾಯಿಯು ದುಃಖದಿಂದಿರುವಾಗ ಪರಮೇಶ್ವರನ ಸಾಕ್ಷಾತ್ಕಾರವು ನನಗಾದೀತೇ?" ಎಂದು ವಿಚಾರಮಗ್ನನಾಗುತ್ತಿದ್ದನು.

ಒಂದು ದಿವಸ ಹೀಗೆ ಯೋಚನಾಮಗ್ನನಾಗಿ ಇದ್ದಾಗ—"ನಿನ್ನಿಂದ ಲೋಕಕಲ್ಯಾಣದ ಕೆಲಸವು ಆಗಲಿಕ್ಕಿದೆ. ಸಮಯವನ್ನು ನಿರೀಕ್ಷಿಸುತ್ತಿರು" ಎಂಬ ಒಂದು ದೈವೀಪ್ರೇರಣೆಯಾದಂತೆ ಅವನಿಗೆ ಭಾಸವಾಯಿತು. ಗದಾಧರನಿಗೆ ಇದರಿಂದ ತೃಪ್ತಿಯಾಯಿತು.

ಗದಾಧರನು ಮುಂದೆ 'ರಾಮಕೃಷ್ಣ ಪರಮಹಂಸ'ರೆಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿದನು. ನಿತ್ಯಯೋಗಿಗಳಾದ ಇವರು ಆತ್ಮಸಾಕ್ಷಾತ್ಕಾರವನ್ನು ಪಡೆದು—ಸ್ವಾಮಿ ವಿವೇಕಾನಂದರೇ ಮೊದಲಾದ ಶಿಷ್ಯೋತ್ತಮರ ಮೂಲಕ ಹಿಂದೂಧರ್ಮವನ್ನು ಬೆಳಗಿಸಿದರು.

\-\-\-\-\-\-\-\-

## ೩. ಬಾಲಕ ರವೀಂದ್ರ

ರವೀಂದ್ರನಾಥ ಠಾಕೂರರು ೧೮೬೧ರಲ್ಲಿ (ತಾ. ೭—೫—೧೮೬೧) ಕಲ್ಕತ್ತಾ ಪಟ್ಟಣದಲ್ಲಿ ಹುಟ್ಟಿದರು. ಮಹರ್ಷಿ ದೇವೇಂದ್ರನಾಥ ಠಾಕೂರರು ಅವರ ತಂದೆ. ಚಿಕ್ಕಂದಿನಲ್ಲಿಯೇ ಅವರ ತಾಯಿ ತೀರಿಹೋಗಿದ್ದರು.

ಬಾಲಕ ರವೀಂದ್ರನು ಚಿಕ್ಕಂದಿನಲ್ಲಿ ಪಂಜರದ ಗಿಳಿಯಂತಿದ್ದನು. ಅವನಿಗೆ ಯಾವುದಕ್ಕೂ ಸ್ವಾತಂತ್ರ್ಯವಿರಲಿಲ್ಲ. ರಾತ್ರಿಹಗಲು ಇಡೀ ದಿವಸ ಅವನ ಸುತ್ತಮುತ್ತ ಸೇವಕರಿರುತ್ತಿದ್ದರು. ಅವನ ಯೋಗಕ್ಷೇಮವನ್ನು ಅವರು ಯಾವ ರೀತಿಯಲ್ಲಿ ನೋಡಿಕೊಳ್ಳುತಿದ್ದರೆಂದರೆ — ಮನೆಯ ಹೊರಗೆ ಅವರ ಆಜ್ಞೆಯ ಹೊರತು ಅವನಿಗೆಲ್ಲಿಗೂ ಹೋಗಲು ಸಾಧ್ಯವಿಲ್ಲ. ಮನಬಂದಂತೆ ತಿರುಗಿದರೆ ಮಗುವಿಗೆ ಎಲ್ಲಿಯಾದರೂ ಅಪಾಯ ಸಂಭವಿಸಬಹುದೆಂಬ ಭೀತಿಯಿಂದ ದೇವೇಂದ್ರನಾಥರು ಆ ರೀತಿಯ ಏರ್ಪಾಡು ಮಾಡಿದ್ದರು. ಅವನ ಎಲ್ಲ ಕೆಲಸಗಳನ್ನೂ ಸೇವಕರೇ ಮಾಡುತ್ತಿದ್ದರು.

ಇವನು ಒಂದು ಸುಪ್ಪತ್ತಿಗೆಯಲ್ಲಿ ಯಾವಾಗಲೂ ಒರಗಿಕೊಂಡು ಇದ್ದ ರಾಯಿತು. ತಾಯಿಯಿಲ್ಲದ ತಬ್ಬಲಿಯಲ್ಲವೇ? ಮಗುವಿಗೆ ಯಾವ ರೀತಿಯ ಕಷ್ಟವೂ ಒದಗಬಾರದೆಂದು ತಂದೆಯ ಅಭಿಪ್ರಾಯವಾಗಿತ್ತು. ಹಕ್ಕಿಯಂತೆ ಹಾರಾಡಬೇಕು. ಎಲ್ಲೆಲ್ಲಿಯೂ ತಿರುಗಾಡಿ ಎಲ್ಲಾ ವಿಷಯಗಳನ್ನೂ ತಿಳಿದುಕೊಳ್ಳಬೇಕೆಂದು ಆಶೆಪಡುತ್ತಿದ್ದ ರವೀಂದ್ರನು ಈ ಸೇವಕರ ಕಾವಲಿನಿಂದಾಗಿ ತುಂಬ ಬೇಸರಪಡುತ್ತಿದ್ದನು.

ಐದಾರು ವರ್ಷಗಳಾದ ಕೂಡಲೇ ರವೀಂದ್ರನನ್ನು ಶಾಲೆಗೆ ಕಳುಹಿಸಿದರು. ಅಲ್ಲಿ ತುಂಟ ಮಕ್ಕಳಿಗೆ ಉಪಾಧ್ಯಾಯರು ಕೊಡುವ ನಾನಾ ತರದ ಶಿಕ್ಷೆಗಳನ್ನು ಕಂಡು ರವೀಂದ್ರನು ಶಾಲೆಗೆ ಹೋಗಲು ಹೆದರುತ್ತಿದ್ದನು. ಆದರೆ ಶಾಲೆಗೆ ಹೋಗದೆ ಒಂದು ದಿವಸವಾದರೂ ಮನೆಯಲ್ಲಿ ನಿಲ್ಲುತಿದ್ದಿಲ್ಲ. ಅವನು ಶಾಲೆಯಲ್ಲಿ ಎಲ್ಲ ಹುಡುಗರಿಗಿಂತಲೂ ಹಿಂದೆ ಕೂತುಕೊಳ್ಳುತ್ತಿದ್ದನು. ಉಪಾಧ್ಯಾಯರ ಯಾವ ಪ್ರಶ್ನೆಗೂ ಉತ್ತರವನ್ನು ಕೊಡುತ್ತಿದ್ದಿಲ್ಲ. ಆದರೆ ವರ್ಷಾಂತ್ಯದಲ್ಲಿ ಆಗುವ ಪರೀಕ್ಷೆಯಲ್ಲಿ ಮಾತ್ರ ಸರ್ವ ಪ್ರಥಮನಾಗಿ ಪಾಸಾದನು. ಇದನ್ನು ಕಂಡು ಉಪಾಧ್ಯಾಯರಿಗೆ ಬಹಳ ಆಶ್ಚರ್ಯವಾಯಿತು. ಬೇರೆಯವರ ಸಹಾಯದಿಂದ ಪಾಸಾದನೋ ಎಂಬ ಸಂಶಯದಿಂದ ಅವರು ಪುನಃ ರವೀಂದ್ರನನ್ನು ಪರೀಕ್ಷೆಮಾಡಿದರು. ಹುಡುಗನು ಆಗಲೂ ಮೊದಲಿನಂತೆಯೇ ಉತ್ತಮ ರೀತಿಯಲ್ಲಿ ಉತ್ತೀರ್ಣನಾದನು.

ಮನೆಯಲ್ಲೂ ರವೀಂದ್ರನು ಬೇರೆ ಬೇರೆ ವಿಷಯಗಳನ್ನು ಅಭ್ಯಾಸ ಮಾಡುತ್ತಿದ್ದನು. ಎಲ್ಲ ತರದ ಪ್ರಾಣಿಗಳ–ಪಕ್ಷಿಗಳ–ವನಸ್ಪತಿಗಳ ವಿಚಾರಗಳನ್ನು ಓದಿ ತಿಳಿದುಕೊಂಡನು. ಸಣ್ಣ ಸಣ್ಣ ಕತೆ ಪುಸ್ತಕಗಳನ್ನೂ ಕವಿತೆಗಳನ್ನೂ ಓದುವುದೆಂದರೆ ರವೀಂದ್ರನಿಗೆ ಬಹಳ ಪ್ರೀತಿ. ಅದಲ್ಲದೆ ರವೀಂದ್ರನು ಶಾಲೆಯಲ್ಲಿ ಕಲಿತುದಕ್ಕಿಂತಲೂ ಹೆಚ್ಚಾಗಿ ಎಲ್ಲ ವಿಷಯಗಳಲ್ಲೂ ಉತ್ತಮ ಜ್ಞಾನವನ್ನು ಪಡೆಯಲಿಕ್ಕೆ ಯೋಗ್ಯವಾದ ಸಂದರ್ಭವು ಇನ್ನೊಂದು ರೀತಿಯಲ್ಲಿ ಒದಗಿತು. ಮಹರ್ಷಿ ದೇವೇಂದ್ರನಾಥರ ಮಿತ್ರರಾಗಿದ್ದ— ರಾಜನಾರಾಯಣ ಬಸು, ಅಕ್ಷಯ ಕುಮಾರದತ್ತ ಮೊದಲಾದ ವಿದ್ವಾಂಸರು ಪ್ರತಿದಿನವೂ ಅವರ ಮನೆಗೆ ಬರುತ್ತಿದ್ದರು. ಅವರೆಲ್ಲರೂ ಉತ್ತಮ ಕವಿಗಳೂ, ಗಾಯಕರೂ, ವಿಜ್ಞಾನಿಗಳೂ ಆಗಿದ್ದರು. ಅವರೊಡನೆ ನಿತ್ಯ

ವ್ಯವಹಾರವನ್ನು ಮಾಡುತ್ತಿದ್ದ ರವೀಂದ್ರನು ಯೋಗ್ಯ ಸಂಸ್ಕಾರವನ್ನು ಪಡೆದನು.

ರವೀಂದ್ರನು ಎಂಟು ವರ್ಷದವನಾಗಿದ್ದಾಗಲೇ ಒಂದು ಪದ್ಯವನ್ನು ಬರೆದನು. ಆ ಪದ್ಯ ರಚನೆಯ ಸಂದರ್ಭವು ಹೀಗಿತ್ತು: ಒಂದು ದಿವಸ ಯಾರೋ ಒಬ್ಬ ಕವಿಯು ಒಂದು ಕವಿತೆಯನ್ನು ಓದುತ್ತಾ ಇದ್ದನು. ಏನೋ ಒಂದು ಸ್ಫೂರ್ತಿಯು ಬಂದಂತಾಯಿತು, ಹುಡುಗನಿಗೆ! ಕೂಡಲೇ ಕೆಲವು ಶಬ್ದಗಳನ್ನು ಸೇರಿಸಿ ತಾನಾಗಿಯೇ ಒಂದು ಕವಿತೆಯನ್ನು ರಚಿಸಿದನು. ಅದನ್ನು ತಾನೇ ಎರಡು ಮೂರು ಬಾರಿ ಹಾಡಿದನು. ಸಂತೋಷದಿಂದ ತನ್ನ ಅಣ್ಣಂದಿರಿದ್ದಲ್ಲಿಗೆ ಓಡಿ ಅವರ ಮುಂದೆ ಹಾಡಿ ತೋರಿಸಿದನು. ಮುಂದೆ ಆಗಾಗ್ಗೆ ರವೀಂದ್ರನು ಚಿಕ್ಕ ಪುಟ್ಟ ಕವಿತೆಗಳನ್ನು ರಚಿಸಹತ್ತಿದನು. ಕವಿತೆಗಳನ್ನು ಬರೆದ ಮೇಲೆ ಬೇರೆಯವರಿಗೆ ಅದನ್ನು ಕೇಳಿಸದೆ ಇದ್ದರೆ ಅವನಿಗೆ ಸಮಾಧಾನವಾಗುತ್ತಿದ್ದಿಲ್ಲ. ಆದರೆ ಕೆಲವರು ಅವನ ಬಂಧುಗಳು ಆ ಪದ್ಯಗಳನ್ನು ಕೇಳಿ ತಮಾಷೆಮಾಡುತ್ತಿದ್ದರು--ನಗಾಡುತಿದ್ದರು. ಹಾಗಿದ್ದವರ ಮುಂದೆ ಮತ್ತೆ ಎಂದಿಗೂ ಕವಿತೆಗಳನ್ನು ಅವನು ಓದಿಹೇಳುತ್ತಿದ್ದಿಲ್ಲ.

ಹತ್ತು ವರ್ಷದಲ್ಲಿ ರವೀಂದ್ರನಿಗೆ ಉಪನಯನವಾಯಿತು. ಆ ಮೇಲೆ ಒಂದು ದಿವಸ ಮಹರ್ಷಿ ದೇವೇಂದ್ರನಾಥರು ಮಗನೊಡನೆ—"ನನ್ನೊಡನೆ ಹಿಮಾಲಯ ಪ್ರದೇಶಗಳಿಗೆ ಬರುತ್ತೀಯಾ?" ಎಂದು ಕೇಳಿದರು. ಮನೆಯಲ್ಲಿಯೇ ಸೇವಕರ ಕಾವಲಿನೊಳಗಿದ್ದು ಬೇಸತ್ತುಹೋದ ರವೀಂದ್ರನು ತಂದೆಯವರ ಮಾತನ್ನು ಕೇಳಿ ಬಹಳ ಸಂತೋಷಪಟ್ಟನು. "ಅಪ್ಪಾ! ನಾನು ನಿಮ್ಮೊಡನೆ ಬರುತ್ತೇನೆ" ಎಂದು ಮಹದಾನಂದದಿಂದ ಹೇಳಿದನು.

ತಂದೆ-ಮಗ ಇಬ್ಬರೂ ಒಂದು ದಿವಸ ಹೊರಟರು. ರವೀಂದ್ರನು ಈ ವರೆಗೆ ರೈಲ್ವೇ ಸ್ಟೇಷನ್ ಕೂಡ ನೋಡಿರಲಿಲ್ಲ. ಸ್ಟೇಷನಿನಲ್ಲಿ ಸೇರಿದ್ದ ಪ್ರಯಾಣಿಕರ ಸಮುದಾಯವನ್ನು ಕಂಡು ಹುಡುಗನಿಗೆ ಆಶ್ಚರ್ಯವಾಯಿತು. ತಾವು ಹೊರಟ ದಿವಸವೇ ಎಲ್ಲರೂ ಹೊರಟಿದ್ದಾರೆ ಎಂದು ತಿಳಿದುಕೊಂಡನು. ಬಂಡಿ ಬಂತು, ಎಲ್ಲರೂ ರೈಲು ಹತ್ತಿದರು. ರವೀಂದ್ರನೂ ತಂದೆಯೊಡನೆ ಗಾಡಿ ಹತ್ತಿದನು. ಗಾಡಿ ಹೋಗುವಾಗ ಹಿಂದೆ ಹಿಂದೆ ಓಡುವಂತೆ ಕಾಣಬರುತ್ತಿದ್ದ ಕಾಡುಗುಡ್ಡೆ, ಮರಗಿಡ, ಹೊಲಗದ್ದೆ ತೋಡು ಹೊಳೆಗಳನ್ನು ನೋಡುತ್ತಾ ಆಶ್ಚರ್ಯ--ಸಂತೋಷಗಳಿಂದ ರವೀಂದ್ರನು

ತನ್ನನ್ನು ತಾನೇ ಮರೆತನು. 'ಬೋಲ್ಪುರ್' ಎಂಬಲ್ಲಿಗೆ ಅವರಿಗೆ ಹೋಗ ಬೇಕಾಗಿತ್ತು. ರೈಲು ಬಂಡಿಯು ಅಲ್ಲಿ ನಿಂತ ಕೂಡಲೇ ಇಬ್ಬರೂ ಇಳಿದರು. ಮೊದಲೇ ನಿಶ್ಚಯಮಾಡಿದ್ದ ಒಂದು ಮನೆಗೆ ಹೋದರು. ಇಲ್ಲಿಗೆ ಬಂದ ಮೇಲೆ ರವೀಂದ್ರನಿಗೆ ತುಂಬಾ ಸಂತೋಷವಾಯಿತು. ಅದಕ್ಕೆ ಒಂದನೇ ಕಾರಣವೆಂದರೆ—ಸೇವಕರ ಕಾವಲಿನ ಬಂಧನವಿಲ್ಲವಲ್ಲ ಎಂಬುದು. ಇಲ್ಲಿ ಅವನಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತು. ಸ್ವೇಚ್ಛೆಯಿಂದ ಎಲ್ಲಿಯೂ ತಿರುಗಾಡಬಹುದು. ಕೆಲವು ಸಾರಿ ಏಕಾಕಿಯಾಗಿ ತಿರುಗಾಡುತ್ತಾ ಯಾವುದಾದರೊಂದು ಮರದ ಕೆಳಗೆ ಕುಳಿತು ಕವಿತೆಯನ್ನು ಬರೆಯು ತಿದ್ದನು. ಅಲ್ಲಿನ ಸೃಷ್ಟಿ ಸೌಂದರ್ಯವನ್ನು ಕಂಡು ಅವನಿಗೆ ಪರಮಾನಂದ ವಾಯಿತು. ತಂದೆಮಕ್ಕಳ ಅಲ್ಲಿಯ ದಿನಚರ್ಯೆಯು ಹೀಗಿತ್ತು:— ಮುಂಜಾನೆ ನಾಲ್ಕುವರೆ ಘಂಟೆಗೆ ಎದ್ದು ಸ್ನಾನ ಸಂಧ್ಯಾವಂದನೆಗಳನ್ನು ಮಾಡುವುದು. ಆ ಮೇಲೆ ತಂದೆಯು ಸ್ವತಃ ಮಗನಿಗೆ ಪಾಠ ಹೇಳಿ ಕೊಡುತ್ತಿದ್ದರು. ಕಾವ್ಯ ನಾಟಕಾದಿಗಳ ಪರಿಚಯವನ್ನು ಮಾಡಿಕೊಡು ತ್ತಿದ್ದರು. ಅನಂತರ ತಂದೆಯು ತಮ್ಮ ಕೆಲಸಕ್ಕೆ ಹೋಗುತ್ತಿದ್ದರು. ಸಾಯಂ ಕಾಲ ಇಬ್ಬರೂ ತಿರುಗಾಡುತ್ತಿದ್ದರು. ಆಗ ಸುಂದರ ದೃಶ್ಯಗಳನ್ನು ನೋಡುತ್ತ ಎಷ್ಟೋ ವಿಷಯಗಳನ್ನು ತಂದೆಯವರೊಡನೆ ಕೇಳಿ ತಿಳಿದು ಕೊಳ್ಳುತ್ತಿದ್ದನು. ಕೆಲವು ದಿವಸಗಳ ನಂತರ ತಂದೆಯು ಮಗನನ್ನು ಊರಿಗೆ ಕಳುಹಿಸಿಕೊಟ್ಟರು. ಪ್ರಯಾಣದಿಂದ ಹಿಂತಿರುಗಿದ ರವೀಂದ್ರನು ಮನೆಯಲ್ಲಿ ಸ್ವೇಚ್ಛೆಯಿಂದ ಇರುತಿದ್ದನು. ಮನೆಯ ನೌಕರರ ಮೇಲ್ವಿ ಚಾರವನ್ನು ತಾನೇ ನೋಡಿಕೊಳ್ಳುತಿದ್ದನು.

ತನ್ನ ಕೆಲವು ಗೆಳೆಯರನ್ನೂ ಸಹೋದರರನ್ನೂ ಒಟ್ಟು ಸೇರಿಸಿ ಬಾಲ ಸಭೆಯೆಂಬ ಒಂದು ಸಂಘವನ್ನು ಸ್ಥಾಪಿಸಿದನು. ವಿದ್ಯಾಭ್ಯಾಸದ ವಿಚಾರ ವಾಗಿ ಆ ಕೂಟದಲ್ಲಿ ಆಗಾಗ್ಗೆ ಚರ್ಚೆಗಳಾಗುತ್ತಿದ್ದುವು. ಒಂದು ಸಾರಿ ರವೀಂ ದ್ರನು ಗೆಳೆಯರೊಡಗೂಡಿ ಬೆಂಕಿಪೆಟ್ಟಿಗೆಯ ಉದ್ಯೋಗವನ್ನು ಕೈಕೊಂಡನು. ಆ ಕೆಲಸದಲ್ಲಿ ಅಸಫಲನಾದನು. ಹಣದ ದೃಷ್ಟಿಯಿಂದ ಲಾಭಾಂಶವೇನೂ ಕಂಡುಬಾರದ್ದರಿಂದ ಆ ಕಾರ್ಯವನ್ನು ಅಲ್ಲಿಗೆ ಅಂತ್ಯಗೊಳಿಸಿದನು.

ರವೀಂದ್ರನು ಇಲ್ಲಿಯ ಶಿಕ್ಷಣವನ್ನು ಮುಗಿಸಿ ತನ್ನ ಹದಿನೇಳನೆಯ ವರ್ಷದಲ್ಲಿ ಇಂಗ್ಲೆಂಡಿಗೆ ಹೋದನು. ಅಲ್ಲಿ ಒಂದು ವರ್ಷದ ವರೆಗೆ ಇದ್ದು

ಊರಿಗೆ ಹಿಂದುರುಗಿದನು. ಸಂಗೀತ ಮತ್ತು ಅಭಿನಯದಲ್ಲಿಯೂ ಇವನು ಉತ್ತಮ ಪಂಡಿತನಾಗಿದ್ದನು. ಅದೇ ಸಮಯದಲ್ಲಿ ಮೊದಲನೆಯದಾಗಿ ಅವನು 'ವಾಲ್ಮೀಕಿ ಪ್ರತಿಭಾ' ಎಂಬ ಗೀತಾ ನಾಟಕವನ್ನು ಬರೆದನು. ಗೆಳೆಯರೊಡಗೂಡಿ ಮನೆಯಲ್ಲಿ ಅದನ್ನು ಯಶಸ್ವಿಯಾಗಿ ಅಭಿನಯಿಸಿದನು.

ಈ ರೀತಿಯಲ್ಲಿ ರವೀಂದ್ರನಾಥ ಠಾಕೂರರು ತಮ್ಮ ಸಾಹಿತ್ಯ ಸೇವೆಯನ್ನು ಮುಂದುವರಿಸುತ್ತಾ 'ಗೀತಾಂಜಲಿ' ಎಂಬ ಅಮೂಲ್ಯ ಕಾವ್ಯವನ್ನು ರಚಿಸಿದರು. ಅದು ಎಲ್ಲ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಯಿತು. ಅದನ್ನು ಬೇರೆ ಬೇರೆ ಕವಿಗಳು, ಇಂಗ್ಲೀಷ್, ಹಿಂದಿ, ಕನ್ನಡ ಮೊದಲಾದ ಭಾಷೆಗಳಿಗೆ ಅನುವಾದ ಮಾಡಿದರು. ಅದಲ್ಲದೆ ಈ ಕಾವ್ಯಕ್ಕೆ ಸುಪ್ರಸಿದ್ಧವಾದ 'ನೋಬೆಲ್ ಪ್ರೈಸ್' ಎಂಬ ಪಾರಿತೋಷಕವು ದೊರೆಯಿತು. ಆ ಮೇಲೆ ರವೀಂದ್ರರು ವಿದ್ಯಾರ್ಥಿಗಳಿಗೆ ಯೋಗ್ಯ ಶಿಕ್ಷಣವನ್ನು ದೊರಕಿಸಿಕೊಡಬೇಕೆಂಬ ಉದ್ದೇಶದಿಂದ 'ಶಾಂತಿನಿಕೇತನ'ವೆಂಬ ಒಂದು ವಿದ್ಯಾಮಂದಿರವನ್ನು ಸ್ಥಾಪಿಸಿ ಲೋಕವಿಖ್ಯಾತರಾದರು.

* * * * * * * * *

## ೪. ಬಾಲಕ ನರೇಂದ್ರ

ವಿಶ್ವನಾಥರಾಯರು ಕಲ್ಕತ್ತೆಯ ದೊಡ್ಡ ವಕೀಲರು. ಭುವನೇಶ್ವರೀ ದೇವಿಯು ಅವರ ಧರ್ಮಪತ್ನಿ. ಅವರಿಗೆ ಗಂಡುಮಕ್ಕಳಿರಲಿಲ್ಲ. ಅದಕ್ಕಾಗಿ ಕಾಶೀ ವಿಶ್ವನಾಥನನ್ನು ನಾನಾ ರೀತಿಯಾಗಿ ಪ್ರಾರ್ಥಿಸಿಕೊಂಡರು. ಪರಮೇಶ್ವರನೇ ತನ್ನ ಹೊಟ್ಟೆಯಲ್ಲಿ ಹುಟ್ಟುವ ರೀತಿಯಲ್ಲಿ ಭುವನೇಶ್ವರಿಗೆ ಒಂದು ರಾತ್ರೆ ಕನಸು ಬಿತ್ತು. ದಂಪತಿಗಳಿಗೆ ಸಂತೋಷವಾಯಿತು.

೧೮೬೩ನೇ ಇಸವಿ ಜನವರಿ ೧೨ನೇ ತಾರೀಕು ಮಕರಸಂಕ್ರಾಂತಿಯ ಶುಭ ದಿವಸದಲ್ಲಿ ಭುವನೇಶ್ವರಿಯು ಒಂದು ಗಂಡು ಮಗುವನ್ನು ಹೆತ್ತಳು. ಮಗುವು ಅಂದವಾಗಿತ್ತು; "ವೀರೇಶ್ವರನ" ದಯದಿಂದ ಹುಟ್ಟಿದ ಮಗುವಿಗೆ "ವೀರೇಶ್ವರ"ನೆಂದೇ ಹೆಸರಿಟ್ಟರು. ಸ್ವಲ್ಪ ಸಮಯ ಕಳೆದ ಬಳಿಕ ಪುರುಷಸಿಂಹನಂತಿದ್ದ ವೀರೇಶ್ವರನಿಗೆ "ನರೇಂದ್ರ"ನೆಂಬ ಹೆಸರಾಯಿತು.

ದತ್ತವಂಶವು ದಾನಧರ್ಮದಲ್ಲಿ ಹೆಸರುಪಡೆದಿತ್ತು. ಅದೇ ವಂಶದಲ್ಲಿ ಹುಟ್ಟಿದ ನರೇಂದ್ರನೂ ಕೂಡ ಮನೆಗೆ ಬಂದ ಭಿಕ್ಷುಕರಿಗೆ ಯಥೇಷ್ಟವಾಗಿ

ಧರ್ಮ ಮಾಡುತ್ತಿದ್ದನು. ಸಾಧು ಸನ್ಯಾಸಿಗಳೆಂದರೆ ಅವನಿಗೆ ಬಹಳ ಪ್ರೀತಿ. ಅವರು ಕೇಳಿದುದನ್ನೆಲ್ಲ ಕೊಡುತ್ತಿದ್ದನು. ಮನೆಯನ್ನೆಲ್ಲ ಈ ರೀತಿ ಖಾಲಿ ಮಾಡುವ ಹುಡುಗನನ್ನು ತಂದೆತಾಯಿಗಳು ಒಮ್ಮೆ ಕೋಣೆಯೊಳಗೆ ಹಾಕಿ ಬೀಗ ಹಾಕಿದ್ದರು. ನರೇಂದ್ರನು, ಆ ಕೋಣೆಯಲ್ಲಿ ತನ್ನ ತಾಯಿಯು ಇರಿಸಿದ್ದ ಒಳ್ಳೆಯ ಕೆಲವು ಸೀರೆಗಳನ್ನು ಕಿಟಕಿಯಿಂದ ಹೊರಗೆ ನಿಂತಿದ್ದ ಒಬ್ಬ ಭಿಕ್ಷುಕನಿಗೆ ಎಸೆದುಬಿಟ್ಟನಂತೆ.

ತುಂಟತನದಲ್ಲೂ ನರೇಂದ್ರನು ಹುಷಾರಾಗಿದ್ದನು. ತನ್ನ ಅಕ್ಕ ತಂಗಿಯರನ್ನು ಒಂದಿಲ್ಲೊಂದು ರೀತಿಯಿಂದ ಕಾಡುತಿದ್ದನು. ಅವರು ಹೊಡೆಯಲು ಬಂದರೆಂದರೆ ಹೇಗಾದರೂ ತಪ್ಪಿಸಿಕೊಳ್ಳುತಿದ್ದನು.

ಚಿಕ್ಕಂದಿನಲ್ಲಿ ನರೇಂದ್ರನಿಗೆ ಮೂಕ ಜೀವಿಗಳ ಮೇಲೆ ತುಂಬ ಪ್ರೀತಿ. ನವಿಲು ಪಾರಿವಾಳಗಳ, ಗಿಳಿ, ಬಿಳಿ ಇಲಿ, ಅಳಿಲು, ಜಿಂಕೆ ಮೊದಲಾದುವುಗಳನ್ನು ಪ್ರೀತಿಯಿಂದ ಸಾಕುತಿದ್ದನು.

ಚಿಕ್ಕಂದಿನಲ್ಲಿ ನರೇಂದ್ರನಿಗೆ ತಾಯಿಯು ರಾಮಾಯಣ ಮಹಾಭಾರತಗಳ ಕತೆಗಳನ್ನು ಹೇಳುತಿದ್ದಳು. ಅದರ ಜೊತೆಯಲ್ಲಿ ಬಂಗಾಳಿ ಮತ್ತು ಇಂಗ್ಲೀಷ್ ಭಾಷೆಯನ್ನೂ ಕಲಿಸುತಿದ್ದಳು.

ಶ್ರೀ ರಾಮನ ಮೇಲೆ ನರೇಂದ್ರನಿಗೆ ತುಂಬ ಭಕ್ತಿಯಿತ್ತು. ಸೀತಾರಾಮರ ಒಂದು ಬೊಂಬೆಯನ್ನು ಅವನು ಸಂತೆಯಿಂದ ತೆಗೆದುಕೊಂಡನು. ಆ ಬೊಂಬೆಯನ್ನು ಮುಂದಿರಿಸಿಕೊಂಡು ಪೂಜೆಮಾಡಲು ತೊಡಗಿದನೆಂದರೆ ಆಹಾರ ವಿಹಾರಗಳನ್ನೂ ಮರೆಯುತ್ತಿದ್ದನು. ಒಮ್ಮೆ ಹುಡುಗನು ಎಲ್ಲಿಯೂ ಕಾಣಬರಲಿಲ್ಲ. ತಂದೆ ತಾಯಿಗಳು ಎಲ್ಲ ಕಡೆಯಲ್ಲಿಯೂ ಹುಡುಕಾಡಿದರು. ಎಲ್ಲಿಯೂ ಅವನ ಸುಳಿವಿಲ್ಲ. ಅವರಿಗೆ ಬಹಳ ದುಃಖವಾಯಿತು. ಕೊನೆಗೆ ಒಂದು ಕೋಣೆಯೊಳಗೆ ದೇವರ ಮುಂದೆ ನಿಶ್ಚಿಂತತೆಯಿಂದ ಧ್ಯಾನಮಗ್ನನಾದ ನರೇಂದ್ರನನ್ನು ಕಂಡು ಎಲ್ಲರೂ ಆಶ್ಚರ್ಯ–ಸಂತೋಷಗಳಿಂದ ಕೂಡಿದರು. ಶ್ರೀರಾಮನನ್ನು ಪ್ರತ್ಯಕ್ಷ ಕಾಣಬೇಕೆಂಬ ಆಶೆಯುಂಟಾಯಿತು ಬಾಲಕ ನರೇಂದ್ರನಿಗೆ. ರಾಮನನ್ನು ಕಾಣಲು ಹನುಮಂತನು ಮರವನ್ನೇರುತ್ತಿದ್ದನೆಂದು ಕೇಳಿ ತಿಳಿದ ನರೇಂದ್ರನು ರಾತ್ರೆ ಸಮಯದಲ್ಲಿ ಕೆಲವು ಸಾರಿ ಮರದ ಮೇಲೆ ಕುಳಿತುಕೊಳ್ಳುತ್ತಿದ್ದನಂತೆ!

ರಾತ್ರೆ ಮಲಗುವಾಗ ನರೇಂದ್ರನಿಗೆ ತನ್ನ ಹುಬ್ಬುಗಳ ಮಧ್ಯದಲ್ಲಿ ಒಂದು ಬೆಳಕು ಕಾಣುತ್ತಿತ್ತು. ಅದು ಕ್ಷಣಾರ್ಧದಲ್ಲಿ ಇಡೀ ದೇಹವನ್ನು

ವ್ಯಾಪಿಸಿದಂತೆ ಅವನಿಗೆ ಅನುಭವವಾಗುತಿತ್ತು. ಈ ವಿಚಾರವನ್ನು ತಿಳಿದು ಎಲ್ಲರೂ ಆಶ್ಚರ್ಯಪಡುತ್ತಿದ್ದನು.

ಧ್ಯಾನಮಗ್ನನಾಗುವಾಗ ನರೇಂದ್ರನಿಗೆ ಹೊರಗಿನ ವಿಷಯಗಳ ಗೊಡವೆಯೇ ಇರುತ್ತಿರಲಿಲ್ಲ. ಒಮ್ಮೆ ಅವನು ದೇವರನ್ನು ಧ್ಯಾನಿಸುತ್ತಿರುವಾಗ ಒಂದು ನಾಗರಹಾವು ಬರಲು, ಹೆದರಿಕೆಯಿಂದ ಬಳಿಯಲ್ಲಿದ್ದ ಗೆಳೆಯರೆಲ್ಲ ಓಡಿಹೋದರು. ನರೇಂದ್ರನು ಕುಳಿತಲ್ಲಿಂದ ಕದಲಲಿಲ್ಲ. ನಾಗರಹಾವು ಇವನ ಬಳಿಯಿಂದ ಹಾದುಹೋಯಿತು. "ನಿನಗೆ ಹೆದರಿಕೆಯಾಗಲಿಲ್ಲವೇ?" ಎಂದು ಗೆಳೆಯರು ವಿಚಾರಿಸಿದಾಗ, "ನಾನು ಹಾವನ್ನೇ ಕಾಣಲಿಲ್ಲ" ಎಂದು ಉತ್ತರಕೊಟ್ಟನು.

ಆರನೇ ವರ್ಷದಲ್ಲಿ ನರೇಂದ್ರನು ಶಾಲೆಗೆ ಹೋಗಲು ಪ್ರಾರಂಭಿಸಿದನು. ಆದರೆ ಕೆಲವೇ ದಿವಸಗಳಲ್ಲಿ ಅವನು ಕೆಟ್ಟ ಬಯ್ಗುಳನ್ನು ಬಯ್ಯಲು ಕಲಿತ ಕಾರಣ ಅವನನ್ನು ಶಾಲೆಯಿಂದ ಬಿಡಿಸಿದರು. ಮನೆಯಲ್ಲಿಯೇ ವಿದ್ಯಾಭ್ಯಾಸವನ್ನು ಮಾಡಿಸಲು ಒಬ್ಬ ಉಪಾಧ್ಯಾಯನನ್ನು ನೇಮಿಸಿದರು. ಕಲಿಯುವುದರಲ್ಲಿ ನರೇಂದ್ರನು ಬಲು ಗಟ್ಟಿಗನಾಗಿದ್ದನು. ಹೇಳಿಕೊಟ್ಟುದನ್ನು ಕೂಡಲೇ ಬಾಯಿಪಾಠ ಹೇಳುತ್ತಿದ್ದನು. ರಾಮಾಯಣ ಮಹಾಭಾರತಗಳ ಕಥೆಗಳೆಲ್ಲವೂ ಅವನ ಕಂಠಪಾಠವಾಗಿದ್ದುವು. ಒಂದು ದಿನ ಹರಿದಾಸರೊಬ್ಬರು ಹರಿಕಥೆಮಾಡುತಿದ್ದಾಗ ಯಾವುದೋ ಒಂದು ಭಾಗವು ಸ್ವಲ್ಪ ತಪ್ಪಿಹೋಗಲು, ಬಾಲಕನಾದ ನರೇಂದ್ರನು ಅದನ್ನು ಕೂಡಲೇ ತಿದ್ದಿದನು. ಎಲ್ಲರೂ ಹುಡುಗನ ಬುದ್ಧಿಶಕ್ತಿಗೆ ಬೆರಗಾದರು

ಆಟಪಾಠದ ಗೆಳೆಯರಿಗೆ ನರೇಂದ್ರನೇ ನಾಯಕನಾಗಿದ್ದನು. ಎಲ್ಲರೂ ಅವನು ಹೇಳಿದಂತೆಯೇ ಕೇಳುತ್ತಿದ್ದರು;

ನರೇಂದ್ರನು ತನ್ನ ಏಳನೇ ವಯಸ್ಸಿನಲ್ಲಿ ಪುನಃ ಈಶ್ವರಚಂದ್ರ ವಿದ್ಯಾಸಾಗರರ ಶಿಕ್ಷಣಸಂಸ್ಥೆಯೊಂದಕ್ಕೆ ಸೇರಿದನು. ಒಮ್ಮೆ ಪಾಠಮಾಡುವಾಗಲೂ ಆಟದಲ್ಲಿಯೇ ಮನಸ್ಸಿಟ್ಟಿದ್ದನು. ಕ್ಲಾಸಿನ ಎಲ್ಲ ಹುಡುಗರೊಡನೆ ಉಪಾಧ್ಯಾಯರು ಪ್ರಶ್ನೆ ಕೇಳಿದರು. ನರೇಂದ್ರನೊಬ್ಬನ ಹೊರತು ಉಳಿದವರೆಲ್ಲರೂ ಪ್ರಶ್ನೆಗೆ ಉತ್ತರಿಸದೆ ಸುಮ್ಮನೆ ನಿಂತರು. ನರೇಂದ್ರನು ಸ್ವಲ್ಪವೂ ತಪ್ಪದೆ ಪಾಠವನ್ನು ಒಪ್ಪಿಸಿದನು. ಉಪಾಧ್ಯಾಯರು ಉತ್ತರ ಹೇಳಿದವರಿಗೆಲ್ಲ ನಿಲ್ಲುವ ಶಿಕ್ಷೆಯನ್ನು ವಿಧಿಸಲು, ನರೇಂದ್ರನೂ ಅವರೊಡನೆ ಎದ್ದುನಿಂತನು.

ಉಪಾಧ್ಯಾಯರು ಅವನೊಡನೆ—"ನೀನು ಕೂತುಕೊ" ಎಂದರು. "ಹೆಚ್ಚು ಮಾತನಾಡುತಿದ್ದವನು ನಾನು ಸರ್! ನಾನೂ ನಿಂತುಕೊಳ್ಳುತ್ತೇನೆ" ಎಂದು ಅವನು ಕೂಡ ಗೆಳೆಯರೊಂದಿಗೆ ಆ ಶಿಕ್ಷೆಯನ್ನು ಅನುಭವಿಸಿದನು.

ಒಮ್ಮೆ ಕ್ಲಾಸಿನಲ್ಲಿ ಚೇಷ್ಟೆಮಾಡುತ್ತಿದ್ದ ಹುಡುಗನೊಬ್ಬನಿಗೆ ಉಪಾಧ್ಯಾಯರು ಹೊಡೆಯುತಿದ್ದಾಗ ನರೇಂದ್ರನು 'ಹ! ಹ್ಹಾ! ಹ್ಹಾ!' ಎಂದು ನಗಾಡಿಬಿಟ್ಟನು. ಉಪಾಧ್ಯಾಯರಿಗೆ ಕೋಪ ತಡೆಯದಾಯಿತು. ಕೂಡಲೇ ಜೋರಾಗಿ ಇವನ ಕಿವಿಯನ್ನು ಹಿಂಡಿಬಿಟ್ಟರು. ಕಿವಿಯು ತೂತಾಗಿ ರಕ್ತ ಸುರಿಯಿತು. ಆಗ ಅಲ್ಲಿಗೆ ಬಂದ ವಿದ್ಯಾಸಾಗರರು ಆ ಉಪಾಧ್ಯಾಯರ ವರ್ತನೆಯನ್ನು ಖಂಡಿಸಿ ನರೇಂದ್ರನನ್ನು ಸಮಾಧಾನಪಡಿಸಿದರು. ನರೇಂದ್ರನಿಗಾದ ಶಿಕ್ಷೆಯನ್ನು ತಿಳಿದ ಮನೆಯವರು, ಶಾಲೆಗೆ ಹೋಗಬೇಡವೆಂದು ಹೇಳಿದರು. ಅವನು ಮಾತ್ರ ಎಲ್ಲವನ್ನೂ ಮರೆತು ಮೊದಲಿನಂತೇ ಶಾಲೆಗೆ ಹೋಗತೊಡಗಿದನು.

ನರೇಂದ್ರನಿಗೆ ಕುರುಡು ನಂಬಿಕೆಗಳಲ್ಲಿ ವಿಶ್ವಾಸವಿರಲಿಲ್ಲ. ನೆರೆಮನೆಯಲ್ಲಿ ಒಂದು ಮಾವಿನಮರವಿತ್ತು. ಗೆಳೆಯರೊಡನೆ ನರೇಂದ್ರನು ಆ ಮರವನ್ನು ಹತ್ತಿ ಪ್ರತಿದಿನವೂ ಮಾವಿನಹಣ್ಣುಗಳನ್ನು ಕೊಯ್ಯುತ್ತಿದ್ದಾಗ ಮನೆಯ ಯಜಮಾನನು,"ಆ ಮರದಲ್ಲಿ ಬ್ರಹ್ಮರಾಕ್ಷಸನಿದ್ದಾನೆ. ಯಾರೂ ಮರಹತ್ತಬೇಡಿ!" ಎಂದು ಹೆದರಿಸಿದನು. ಹುಡುಗರೆಲ್ಲರೂ ಹೆದರಿ ಓಡಿ ಹೋದರು. ನರೇಂದ್ರನು ಮಾತ್ರ ಮರದಿಂದ ಇಳಿಯದೆ ಅದರ ಕೊಂಬೆಯೊಂದರಲ್ಲಿ ಕೂತುಕೊಂಡು ಹಣ್ಣನ್ನು ಕೊಯ್ದು ತಿನ್ನುತ್ತಿದ್ದನು. ಹುಡುಗರು "ಬ್ರಹ್ಮರಾಕ್ಷಸನು ಕೊಂದುಬಿಟ್ಟಾನು" ಎಂದು ಹೇಳಿದರೆ—"ಅವನು ಈ ಮರದಲ್ಲಿರುತ್ತಿದ್ದರೆ ಮೊದಲೇ ಕೊಂದುಬಿಡುತ್ತಿದ್ದನು. ಆ ಗೊಡ್ಡು ಬೆದರಿಕೆಯನ್ನು ನೀವು ನಂಬುತ್ತೀರಲ್ಲಾ! ನೀವೆಲ್ಲಾ ದಡ್ಡರು!" ಎಂದು ತಮಾಷೆಮಾಡಿದನು.

ನರೇಂದ್ರನ ಆಟಗಳಿಗೆ ಮಿತಿಯಿರಲಿಲ್ಲ. ಗೆಳೆಯರೊಡನೆ ಕೂಡಿಕೊಂಡು ನಾಟಕವಾಡಲು ಪ್ರಾರಂಭಿಸಿದನು. ಹುಡುಗರ ಈ ನಾಟಕವು ಎಲ್ಲರಿಗೂ ಹರಟೆಯಾಯಿತು. ಕೊನೆಗೆ ನರೇಂದ್ರನ ಚಿಕ್ಕಪ್ಪನಿಂದಾಗಿ ನಾಟಕವು ನಿಂತುಹೋಯಿತು. ಕತ್ತಿ ದೊಣ್ಣೆ ಕುಸ್ತಿಯಾಟಗಳು ಪ್ರಾರಂಭವಾದುವು. ಅಂತೂ ಒಂದಲ್ಲೊಂದು ತರದ ಆಟವು ಜರಗುತ್ತಲೇ ಇತ್ತು.

• ಒಂದು ಸಾರಿ ಗರಡಿಮನೆಯಲ್ಲಿ ಒಂದು ಭಾರವಾದ ಮರವನ್ನು ಎಲ್ಲರೂ ಸೇರಿ ಎತ್ತುತ್ತಿದ್ದಾಗ ಇವರ ಆಟಗಳನ್ನು ನೋಡುತ್ತಿದ್ದ ಒಬ್ಬ ಇಂಗ್ಲಿಷ್ ಸೈನಿಕನು ಸಹಾಯಕ್ಕಾಗಿ ಬಂದನು. ಆಗ ಫಕ್ಕನೆ ಆ ಮರವು ಸೈನಿಕನ ಹಣೆಗೆ ಬಡಿದು ಅವನು ಮೂರ್ಛೆಹೋದನು. ಸೈನಿಕನು ಸತ್ತ ನೆಂದು ಎಲ್ಲರೂ ಓಡಿಹೋದರು. ನರೇಂದ್ರನೂ ಇಬ್ಬರು ಗೆಳೆಯರೂ ಓಡಿ ಹೋಗದೆ ತಮ್ಮ ಧೋತ್ರವನ್ನು ಹರಿದು ಗಾಯಕ್ಕೆ ಕಟ್ಟಿ ಆ ಸೈನಿಕನಿಗೆ ಶೀತೋಪಚಾರವನ್ನು ಮಾಡಿದರು. ಅವನಿಗೆ ಎಚ್ಚರವಾದ ಕೂಡಲೇ ಗೆಳೆಯರೆಲ್ಲರೂ ವಂತಿಗೆಹಾಕಿ ಸ್ವಲ್ಪ ಹಣ ಸಂಗ್ರಹಿಸಿ ಸೈನಿಕನಿಗೆ ಕೊಟ್ಟು ಕಳುಹಿಸಿದರು.

ಹೀಗೆ ನರೇಂದ್ರನು ಬಾಲ್ಯದಲ್ಲಿಯೇ, ದಯೆ, ದಾಕ್ಷಿಣ್ಯ, ಪ್ರೀತಿ, ಉತ್ಸಾಹ, ಭಕ್ತಿ, ಧೈರ್ಯ ಮೊದಲಾದ ಗುಣಗಳಿಂದ ಶೋಭಿಸಿದನು. ಶಾಲಾ ಕಾಲೇಜುಗಳಲ್ಲಿ ಎಲ್ಲರ ಪ್ರೀತಿಯನ್ನೂ ಸಂಪಾದಿಸಿಕೊಂಡು ಬಿ. ಎ. ಪರೀಕ್ಷೆಯಲ್ಲಿ ಪ್ರಥಮಶ್ರೇಣಿಯಲ್ಲಿ ಪಾಸಾದನು.

ಮುಂದೆ ಶ್ರೀ ರಾಮಕೃಷ್ಣ ಪರಮಹಂಸರ ಶಿಷ್ಯನಾಗಿ "ವಿವೇಕಾನಂದ" ಎಂಬ ಹೆಸರಿನಿಂದ ಲೋಕಪ್ರಸಿದ್ಧನಾದನು.



Edited, Printed & Published by K. V. Shenoy
at the Prabhat Printers, Ltd., Mangalore.